CPMG / KA / BG-GPO/13/2003-2005 ಸುವರ್ಣ ಕರ್ನಾಟಕ - 2006




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೮, ೨೦೦೫ (ಮಾರ್ಗಶಿರ ೧೭, ಶಕ ವರ್ಷ ೧೯೨೭) | ಸಂಚಿಕೆ ೪೮ |
|---|---|---|


## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 108 ಎಂಎಂಸಿ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಸ್ವತಂತ್ರ ಪ್ರಭಾರದ ಮೇಲೆ ಸಹಾಯಕ ಪ್ರಾಧ್ಯಾಪಕರಾದ ಡಾ: ಕೆ.ಆರ್. ಮಮತರವರಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ 12000-18300 ರೂ.ಗಳ AICTE ವೇತನ ಶ್ರೇಣಿಯ ಔಷಧ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ಬಡ್ತಿ ನೀಡಿ ಅವರು ಹೊಂದಿರುವ ಔಷಧಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿಯೇ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1343

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ಅಧಿಸೂಚನೆ**

**ಸಂಖ್ಯೆ: ಆಕುಕ 96 ಎಂಎಂಸಿ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ವೈದ್ಯಕೀಯ ಶಿಕ್ಷಣ ಇಲಾಖೆಯ ಈ ಕೆಳಕಂಡ ಅಸ್ಥಿಚಿಕಿತ್ಸಾಶಾಸ್ತ್ರ ಉಪನ್ಯಾಸಕರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 32ನೇ ನಿಯಮದಡಿ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಅವರುಗಳ ಹೆಸರುಗಳ ಮುಂದೆ ತೋರಿಸಿರುವ ಅಸ್ಥಿಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಕೆ.ವಿ. ಪುಟ್ಟಕೆಂಪರಾಜು, ಅಸ್ಥಿಚಿಕಿತ್ಸಾಶಾಸ್ತ್ರ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಕಾಲೇಜು. | ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು ಡಾ: ಕೆ.ಎಸ್. ಮಂಜುನಾಥ್ ರವರ ಬಡ್ತಿ ಮೂಲಕ ತೆರವಾದ ಸ್ಥಾನದಲ್ಲಿ. |
| 2 | ಡಾ: ಅಬ್ದುಲ್ ರಾವೂಫ್, ಅಸ್ಥಿಚಿಕಿತ್ಸಾಶಾಸ್ತ್ರ ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು. | ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಮೈಸೂರು ಮೆಡಿಕಲ್ ಕಾಲೇಜ್, ಮೈಸೂರು ಡಾ: ಕಿರಣ್ ಕಾಳಯ್ಯನವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1344

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ಅಧಿಸೂಚನೆ ಸಂಖ್ಯೆ: ಆಕುಕ 112 ಎಂಎಂಸಿ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಸ್ವತಂತ್ರ ಪ್ರಭಾರ ಮೇಲೆ ಈ ಕೆಳಕಂಡ ರೋಗಲಕ್ಷಣ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಗಳನ್ನು ಹೊಂದಿರುವವರಿಗೆ 12000-18300 ರೂ.ಗಳ AICTE ವೇತನ ಶ್ರೇಣಿಯ ರೋಗ ಲಕ್ಷಣಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅವರುಗಳ ಅನುಕ್ರಮವಾಗಿ ಸ್ವತಂತ್ರ ಪ್ರಭಾರದ ಮೇಲೆ ಹೊಂದಿದ್ದ ರೋಗಲಕ್ಷಣಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಎ.ಆರ್. ರಘುಪತಿ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಮೈಸೂರು ಮೆಡಿಕಲ್ ಕಾಲೇಜ್, ಮೈಸೂರು. | ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. |
| 2 | ಡಾ: ಭಾರತಿ ಮುನಿಯಪ್ಪ ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಮೈಸೂರು ಮೆಡಿಕಲ್ ಕಾಲೇಜ್, ಮೈಸೂರು. | ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು. |
| 3 | ಡಾ: ಬಿ.ಎಸ್. ದಯಾನಂದ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು. | ಸಹಾಯಕರು ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. |
| 4 | ಡಾ: ಸಿದ್ದಿಕ್ ಮುಖಾಮಿಲ್ ಅಹ್ಮದ್ ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು | ಸಹಾಯಕರು ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. |
| 5 | ಡಾ: ಎಂ. ನಟರಾಜನ್, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು. | ಸಹಾಯಕರು ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1345

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**ಅಧಿಸೂಚನೆ**

**ಸಂಖ್ಯೆ: ಆಕುಕ 99 ಎಂಎಂಸಿ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಈ ಕೆಳಕಂಡ ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕರುಗಳಿಗೆ 16400-20000 ರೂ.ಗಳ AICTE ವೇತನ ಶ್ರೇಣಿಯ ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅವರುಗಳ ಹೆಸರುಗಳ ಮುಂದೆ ತೋರಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಕೆ. ಹನುಮಂತಯ್ಯ, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಕಿಮ್ಸ್, ಹುಬ್ಬಳ್ಳಿ. | ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಬಸವಯ್ಯ ರವರ ಸ್ವಇಚ್ಛಾ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕಿಮ್ಸ್‌ನ ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರ ಖಾಲಿ ಹುದ್ದೆಯಲ್ಲಿ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜಿಸಿ ನೇಮಿಸಲಾಗಿದೆ. |
| 2 | ಡಾ: ಕರ್ಜಗಿ ಸಿದ್ದಲಿಂಗಪ್ಪ, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ವಿಮ್ಸ್, ಬಳ್ಳಾರಿ. | ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ವೈ.ಎನ್. ಸಚ್ಚಿದಾನಂದರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ, ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಬಳ್ಳಾರಿಯ ವಿಮ್ಸ್‌ನ ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರ ಖಾಲಿ ಹುದ್ದೆಯಲ್ಲಿ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜಿಸಿ ನೇಮಿಸಲಾಗಿದೆ. |
| 3 | ಡಾ: ಎಸ್. ಸಚ್ಚಿದಾನಂದ, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ಮೆಡಿಕಲ್ ಕಾಲೇಜು. | ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಎನ್.ಸಿ. ಹಿರೇಮಠರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 4 | ಡಾ: ರಾಘವೇಂದ್ರ ತೋಪಖಾನೆ, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ಕಿಮ್ಸ್, ಹುಬ್ಬಳ್ಳಿ. | ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು - ವರ್ಗಾವಣೆಯಾದ ಡಾ: ಕೆ. ಹನುಮಂತಯ್ಯ ರವರ ಸ್ಥಾನದಲ್ಲಿ. ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕಿಮ್ಸ್, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರ ಖಾಲಿ ಹುದ್ದೆಯಲ್ಲಿ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜಿಸಿ ನೇಮಿಸಲಾಗಿದೆ. |

| | | |
|---|---|---|
| 5 | ಡಾ: ಹೆಚ್.ವಿ. ನಟರಾಜ, ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ, ಬೆಂಗಳೂರು ಮೆಡಿಕಲ್ ಕಾಲೇಜು. | ಚರ್ಮ ಮತ್ತು ಲೈಂಗಿಕ ರೋಗಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು - ವರ್ಗಾವಣೆಯಾದ ಡಾ: ಕರ್ಜಗಿ ಸಿದ್ದಲಿಂಗಪ್ಪ ರವರ ಸ್ಥಾನದಲ್ಲಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1346

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಅಧಿಸೂಚನೆ

### ಸಂಖ್ಯೆ: ಆಕುಕ 117 ಎಂಎಂಸಿ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005

ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಈ ಕೆಳಕಂಡ ಅಣುಜೀವಿಶಾಸ್ತ್ರ ಸಹಾಯಕ ಪ್ರಾಧ್ಯಾಪಕರುಗಳಿಗೆ 16400-20000 ರೂ.ಗಳ AICTE ವೇತನ ಶ್ರೇಣಿಯ ಅಣುಜೀವಿಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅವರುಗಳ ಹೆಸರುಗಳ ಮುಂದೆ ತೋರಿಸಿರುವ ಹುದ್ದೆಗಳಿಗೆ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಕೆ. ಭಾರತಿ, ಅಣುಜೀವಿಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು. | ಅಣುಜೀವಿಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು - ಡಾ: ಮುನಾಸಿರಾ ಸುಲ್ತಾನಾರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 2 | ಡಾ: ಟಿ. ನಾಗರತ್ನಮ್ಮ, ಅಣುಜೀವಿಶಾಸ್ತ್ರ, ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು. | ಅಣುಜೀವಿಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಇ.ಆರ್. ನಾಗರಾಜ್‌ರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1347

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 155 ಎಹೆಚ್‌ಡಿ 2005, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2005

ಅಧಿಸೂಚನೆ ಸಂಖ್ಯೆ: ಲೋಇ 441 ಸೇಸಎ 2005 ದಿನಾಂಕ: 30.9.2005ರ ಕ್ರಮ ಸಂಖ್ಯೆ: 18ರಲ್ಲಿ ಶ್ರೀ ಎಲ್.ವೈ. ಮಾಳೋದೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ ಬೆಳಗಾಂ ಇವರ ಸೇವೆಯನ್ನು ಹುಬ್ಬಳ್ಳಿ-ಧಾರವಾದ ಮಹಾನಗರ ಪಾಲಿಕೆ ಇಲ್ಲಿ ನೇಮಿಸುವ ಸಲುವಾಗಿ ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ.

ಸರ್ಕಾರದ ಪತ್ರ ಸಂಖ್ಯೆ: ನಅಇ 161 ಎಹೆಚ್‌ಡಿ 2005 ದಿನಾಂಕ: 5.11.2005ರಲ್ಲಿ ಸಹಾಯಕ ಆರೋಗ್ಯಾಧಿಕಾರಿ ವೇತನ ಶ್ರೇಣಿ ರೂ. 9580-14200 ಹುದ್ದೆಯನ್ನು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರ ವೇತನ ಶ್ರೇಣಿ ರೂ. 7400-13120 ಹುದ್ದೆಗೆ ಪರಿವರ್ತಿಸಿರುವ ಸ್ಥಳದಲ್ಲಿ ಶ್ರೀ ಎಲ್.ವೈ. ಮಾಳೋದೆ, ಸಹಾಯಕ ಕಾರ್ಯಪಾಲಕ ಅಭಿಯಂತರರನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ಮರು ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1348

**ಎಸ್.ಜೆ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಅಪಜೀ 153 ಎಫ್‌ಪಿಸಿ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ 2005

ಶ್ರೀ ವಿ.ಪಿ. ಹಿರೇಮಠ, ಭಾಅಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಡಾ: ರವಿ ರಾಲ್ಫ್, ಭಾಅಸೇ., ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ, ಇವರ ಸ್ಥಾನದಲ್ಲಿ ಕರ್ನಾಟಕ ರಾಜ್ಯ ವಿನರ್ಸ್ ಸಂಸ್ಥೆಯ ನಿರ್ದೇಶಕರ ಮಂಡಳಿಗೆ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1349

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 1 ಎಂಸಿಎಲ್ 2005 (ಭಾಗ-5), ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2005**

1. ದಿ: 14.10.2005 ಸಂಖ್ಯೆ: ಆಕುಕ 535 ಎಂಎಸ್ಎಸ್ 2005ರ ಅಧಿಸೂಚನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅರವಳಿಕೆ ತಜ್ಞರಾದ ಡಾ: ಆರ್. ರಮೇಶ್ ರವರ ಸೇವೆಯನ್ನು ಬೆಂಗಳೂರು ವೈದ್ಯಕೀಯ ಕಾಲೇಜಿನ ಅರವಳಿಶಾಸ್ತ್ರ ಉಪನ್ಯಾಸಕ ಹುದ್ದೆಗೆ ನೇಮಿಸಲು ನೀಡಿರುವುದರಿಂದ ಅವರನ್ನು ಬೆಂಗಳೂರು ವೈದ್ಯಕೀಯ ಕಾಲೇಜಿನ ಅರವಳಿಕೆ ಶಾಸ್ತ್ರ ಉಪನ್ಯಾಸಕರ ಹುದ್ದೆಯಲ್ಲಿ ನಿಯೋಜನೆ ಮೇಲೆ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಡಾ: ಕರುಣ ಹರಸೂರ್‌ರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 1350

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಇಡಿ 332 ಡಿಪಿಐ 2003, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2005**

ಸಾರ್ವಜನಿಕ ಶಿಕ್ಷಣ ಇಲಾಖೆಯ ಶ್ರೀ ಪಿ.ಎಸ್. ದೇಸಾಯಿಗೌಡರ್, ಗ್ರಂಥಪಾಲಕರು, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು ಇವರಿಗೆ ರೂ. 6000-11200ರ ವೇತನ ಶ್ರೇಣಿಯ ಗ್ರಂಥಾಲಯಾಧಿಕಾರಿ ವೃಂದದ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ರಾಜ್ಯ ಶಿಕ್ಷಣ ಸಂಪನ್ಮೂಲ ಮತ್ತು ಮಾಹಿತಿ ಕೇಂದ್ರ, ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸ್ವರ್ಣಲತ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್. 1351

**EDUCATION SECRETARIAT**

**NOTIFICATION No. ED 115 URC 2005(1), Bangalore, dated 7th November 2005**

In the Notification No. DPAR 50 SFP 2005 dated : 26-10-2005, the services of Sri B. Nijalingappa, IFS (JHK-86) Deputy Conservator of Forests, Jalasamvardhana Yojana Sangha, Tumkur have been with drawn from the Water Resources Department and placed at the dispoal of Education Department (Higher Education), Bangalore with immediate effect and until further orders, for being posting him as Registrar (Evaluation), Tumkur University, Tumkur, in the existing vacancy.

Sri. B. Nijalingappa, IFS Deputy Conservator of Forests, Jalasamvardhana Yojana Sangha, Tumkur is reposted as the Registrar (Evaluation), Tumkur University, Tumkur with immediate effect and until further orders.

By Order and in the name of the Governor of Karnataka,
**SUNDARA RAJA GUPTHA**
Under Secretary to Government
Education Department (Universities).

P.R. 1352

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಒಇ 793 ಪಿಪಿಇ 2005, ಬೆಂಗಳೂರು, ದಿನಾಂಕ: 3/8ನೇ ನವೆಂಬರ್ 2005**

ಬೆಂಗಳೂರು ನಗರ 3ನೇ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ದಾಖಲಾಗಿರುವ ಪ್ರಕರಣ ಸಂಖ್ಯೆ: ಎಸ್.ಸಿ. ನಂ. 623:05, 342:05 ರಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಶ್ರೀ ಶ್ರೀಕಾಂತ್ ಹೆಗಡೆ, ಸರ್ಕಾರಿ ಅಭಿಯೋಜಕರು, 6ನೇ ಅಧಿಕ ಸರ್ಕಾರಿ ಅಭಿಯೋಜಕರು, ಅಪರ ಸಿಟಿ ಸಿವಿಲ್ ಹಾಗೂ ಸತ್ರ ನ್ಯಾಯಾಲಯ, ಬೆಂಗಳೂರು ಇವರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಮತ್ತು ಕಾಫಿ ಪೋಸ ಮತ್ತು ಅಭಿಯೋಗ).

ಪಿ.ಆರ್. 1353

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಅಪಜೀ 150 ಎಫ್‌ಪಿಸಿ 2005, ಬೆಂಗಳೂರು, ದಿನಾಂಕ: 08ನೇ ನವೆಂಬರ್ 2005**

ಶ್ರೀ ವಿ.ಪಿ. ಹಿರೇಮಠ, ಭಾಅಸೇ., ವ್ಯವಸ್ಥಾಪಕರ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಡಾ: ರವಿ ರಾಲ್ಫ್, ಭಾಅಸೇ., ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ, ಇವರ ಸ್ಥಾನದಲ್ಲಿ ಮೆ: ಮೈಸೂರು ಮ್ಯಾಚ್ ಕಂಪನಿ, ಶಿವಮೊಗ್ಗ, ಇದರ ನಿರ್ದೇಶಕರು ಹಾಗೂ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1354

**ಅಧಿಸೂಚನೆ**

**ಸಂಖ್ಯೆ: ಅಪಜೀ 154 ಎಫ್‌ಪಿಸಿ 2005, ಬೆಂಗಳೂರು, ದಿನಾಂಕ: 09ನೇ ನವೆಂಬರ್ 2005**

ಶ್ರೀ ವಿ.ಪಿ. ಹಿರೇಮಠ, ಭಾಅಸೇ., ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಪಶ್ಚಿಮಘಟ್ಟ ಅರಣ್ಯ ಅಭಿವೃದ್ಧಿ ಯೋಜನೆ, ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ಸಂ. ಡಿಪಿಎಆರ್ 50 ಎಸ್‌ಎಫ್‌ಪಿ 2005, ದಿ. 26.9.2005 ರಲ್ಲಿ ನೀಡಿದ ಆದೇಶದಂತೆ ಇವರ ಸೇವೆಯನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಆಡಳಿತ ಮಂಡಳಿಯ ನಿರ್ದೇಶಕರು ಹಾಗೂ ವ್ಯವಸ್ಥಾಪಕರ ನಿರ್ದೇಶಕರನ್ನಾಗಿ ಡಾ: ರವಿ ರಾಲ್ಫ್, ಇವರ ಸ್ಥಳದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 1355 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಅಪಜೀ 151 ಎಫ್‌ಪಿಸಿ 2005, ಬೆಂಗಳೂರು, ದಿನಾಂಕ: 09ನೇ ನವೆಂಬರ್ 2005**

ಶ್ರೀ ಇಂದು ಬಿ. ಶ್ರೀವಾಸ್ತವ, ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವ್ಯವಸ್ಥಾಪಕರ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಎಂ.ವಿ. ಮೂಲಿಮನಿ, ಭಾಅಸೇ., ಹಿಂದಿನ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತದ ಮಂಡಳಿಯ ನಿರ್ದೇಶಕರು. ಇವರ ಸ್ಥಾನದಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮದ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿದೆ.

ಈ ಸಂಬಂಧ ಸರ್ಕಾರದ ಅಧಿಸೂಚನೆ ಸಂ. ಅಪಜೀ 126 ಎಫ್‌ಪಿಸಿ 2005, ದಿನಾಂಕ 31.8.2005 ನ್ನು ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 1356 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 538 ಸೇಅಸೆ 2005, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2005**

ಅಖಿಲ ಭಾರತ ಸೇವೆ (ರಜಾ) ನಿಯಮಗಳ ನಿಯಮ 18(ಬಿ)ರ ಅಡಿಯಲ್ಲಿ ಶ್ರೀ ದರ್ಪಣ್‌ಜೈನ್, ಐ.ಎ.ಎಸ್., ಸರ್ಕಾರದ ಉಪಕಾರ್ಯದರ್ಶಿ, ಆರ್ಥಿಕ ಇಲಾಖೆ, ಬೆಂಗಳೂರು ರವರಿಗೆ ದಿನಾಂಕ: 28.10.2005 ರಿಂದ 11.11.2005ರ ವರೆವಿಗೆ (ಉದಿಸೇ) ಒಟ್ಟು 15 ದಿನಗಳ ಪಿತೃತ್ವ (Paternity leave) ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1357 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 104 ಎಂಎಂಸಿ 2005, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2005**

1. ವೈದ್ಯಕೀಯ ಶಿಕ್ಷಣ ಇಲಾಖೆಯ ಈ ಕೆಳಕಂಡ ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರುಗಳಿಗೆ 16400-20000 ರೂ.ಗಳ AICTE ವೇತನ ಶ್ರೇಣಿಯ ಇ.ಎನ್.ಟಿ. ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಹೆಸರುಗಳ ಮುಂದೆ ತೋರಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಪಿ. ಸತ್ಯ, ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು. | ಇ.ಎನ್.ಟಿ. ಪ್ರಾಧ್ಯಾಪಕರು ಮೈಸೂರು ವೈದ್ಯಕೀಯ ಕಾಲೇಜು, ಮೈಸೂರು - ಡಾ: ಎ. ವೆಂಕಟೇಶ್‌ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ. |
| 2 | ಡಾ: ಟಿ.ಡಿ. ಪ್ರಕಾಶ್, ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ಮೆಡಿಕಲ್ ಕಾಲೇಜು, ಬೆಂಗಳೂರು. | ಇ.ಎನ್.ಟಿ. ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು - ಡಾ: ಎಂ. ರಂಗನಾಥ್‌ರವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 3 | ಡಾ: ಹೆಚ್.ಎಸ್. ಸತೀಶ್, ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ಮೆಡಿಕಲ್ ಕಾಲೇಜು, ಬೆಂಗಳೂರು. | ಇ.ಎನ್.ಟಿ. ಪ್ರಾಧ್ಯಾಪಕರು ಬೆಂಗಳೂರು ಮೆಡಿಕಲ್ ಕಾಲೇಜು - ಡಾ: ಬಿ.ಎನ್. ಸಾಂಬಮೂರ್ತಿರವರ ಸ್ವಇಚ್ಛಾ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 4 | ಡಾ: ಎಂ. ರಾಜಶೇಖರ್, ಇ.ಎನ್.ಟಿ. ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ಮೆಡಿಕಲ್ ಕಾಲೇಜ್, ಬೆಂಗಳೂರು. | ಇ.ಎನ್.ಟಿ. ಪ್ರಾಧ್ಯಾಪಕರು ಬೆಂಗಳೂರು ಮೆಡಿಕಲ್ ಕಾಲೇಜು - ಡಾ: ಎ.ಎ. ದಾಸ್‌ರವರ ವಯೋ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |

2. ಮೇಲೆ ಹೇಳಿದ ಪ್ರಾಧ್ಯಾಪಕರುಗಳು ಅವರ ಹೆಸರುಗಳ ಮುಂದೆ ಸೂಚಿಸಿದ ಸ್ಥಳಗಳಲ್ಲಿ ನೇರವಾಗಿ ಕಾರ್ಯಭಾರ ವಹಿಸಿಕೊಳ್ಳುವುದು ಮತ್ತು ಹಾಗೇ ವಹಿಸಿಕೊಂಡ ನಂತರ ಅಧಿಕಾರ ಪ್ರಮಾಣ ಸ್ವೀಕೃತಿ ಪತ್ರ (C.T.C.) ವನ್ನು ಸರ್ಕಾರಕ್ಕೆ ನೇರವಾಗಿ ಸಲ್ಲಿಸಿ ಇಲಾಖಾ ಮುಖ್ಯಸ್ಥರ ಗಮನಕ್ಕೆ ಸಹ ತರುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1358 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 454 ಮೈಅಪ್ರಾ 2005, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2005**

ಲೋಕೋಪಯೋಗಿ ಇಲಾಖೆಯ ಅಧಿಸೂಚನೆ ಸಂಖ್ಯೆ. ಲೋಇ:449:ಸೇಸಎ:2005, ದಿನಾಂಕ: 30.9.2005 ರಲ್ಲಿ ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಸಹಾಯಕ ಕಾರ್ಯಪಾಲಕ ಅಭಿಯಂತರರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಸ್. ನಾಗರಾಜ್, ಇವರ ಸ್ಥಳದಲ್ಲಿ ವರ್ಗಾವಣೆ ಮಾಡಿ ಸದರಿಯವರ ಸೇವೆಯನ್ನು ಮರು ಸ್ಥಳ ನಿಯುಕ್ತಿಗಾಗಿ ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿರುತ್ತಾರೆ. ಅದರಂತೆ ಶ್ರೀ ಎಸ್. ಮಹೇಶ್‌ಬಾಬು, ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರನ್ನು ಶ್ರೀ ಎಸ್. ನಾಗರಾಜ್, ಸಹಾಯಕ ಕಾರ್ಯಪಾಲಕ ಅಭಿಯಂತರರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ರವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಾರ್ಯ ನಿರ್ವಹಿಸಲು ಮರು ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1359 **ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 208 ಅಪಸೇ 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005**

ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಹೆಚ್.ಬಿ. ವಿನಾಯಕಪ್ಪರವರು ನೇಮಕಾತಿ ನಿರೀಕ್ಷಣೆಯಲ್ಲಿ ದಿನಾಂಕ: 18.03.2002 ರಿಂದ ದಿನಾಂಕ: 11.04.2002 ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 8(15) (ಎಫ್) ನೇ ನಿಯಮದನ್ವಯ ಕಡ್ಡಾಯ ನಿರೀಕ್ಷಣಾವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1360 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಸೇವೆಗಳು)

### ಅಧಿಸೂಚನೆ

**ಸಂಖ್ಯೆ: ಅಪಜೀ 05 ಅಪಸೇ 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005**

ಹಿರಿಯೂರು ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಪಿ. ಪಂಚಲಿಂಗೇಗೌಡರವರು ನೇಮಕಾತಿ ನಿರೀಕ್ಷಣೆಯಲ್ಲಿ ದಿನಾಂಕ: 05.05.2000 ರಿಂದ ದಿನಾಂಕ: 12.07.2000 ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 8(15) (ಎಫ್) ನೇ ನಿಯಮದನ್ವಯ ಕಡ್ಡಾಯ ನಿರೀಕ್ಷಣಾವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1361 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಸೇವೆಗಳು)

### ಅಧಿಸೂಚನೆ

**ಸಂಖ್ಯೆ: ಅಪಜೀ 174 ಅಪಸೇ 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005**

ಚಿಕ್ಕಮಗಳೂರು ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಶ್ರೀ ಹೆಚ್. ಶ್ರೀನಿವಾಸ್, ನೇಮಕಾತಿ ನಿರೀಕ್ಷಣೆಯಲ್ಲಿ ದಿನಾಂಕ: 20.04.2005 ರಿಂದ ದಿನಾಂಕ: 24.05.2005 ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 8(15) (ಎಫ್) ನೇ ನಿಯಮದನ್ವಯ ಕಡ್ಡಾಯ ನಿರೀಕ್ಷಣಾವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1362 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಸೇವೆಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 497 ಸೇಅಸೆ 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005**

ಶ್ರೀ ಗೌತಮ್ ಬಸು, ಐ.ಎ.ಎಸ್., ಅಪರ ಮುಖ್ಯಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ರವರಿಗೆ ದಿನಾಂಕ: 12.12.2005 ರಿಂದ 24.12.2005ರ ವರೆವಿಗೆ (ಉದಿಸೇ) ಒಟ್ಟು 13 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಶ್ರೀ ಗೌತಮ್ ಬಸು, ಐ.ಎ.ಎಸ್., ರವರ ರಜಾ ಅವಧಿಯಲ್ಲಿ ಅಪರ ಮುಖ್ಯಕಾರ್ಯದರ್ಶಿ ಹಾಗೂ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ (ಬಿಎಂಆರ್‌ಡಿಎ), ಬೆಂಗಳೂರು ರವರನ್ನು ಅಪರ ಮುಖ್ಯಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀ ಗೌತಮ್ ಬಸು, ಐ.ಎ.ಎಸ್., ರವರು ರಜೆಯ ಮೇಲೆ ಹೋಗಿರದಿದ್ದರೆ ಅಪರ ಮುಖ್ಯಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1363

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

**ಅಧಿಸೂಚನೆ ಸಂಖ್ಯೆ: ಸಿಆಸುಇ 186 ಸೆಪೊಸೆ 2005, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2005**

ಶ್ರೀ ಸಿ. ಚಂದ್ರಶೇಖರ್, ಭಾ.ಪೊ.ಸೇ. ಆರಕ್ಷಕ ಮಹಾ ನಿರೀಕ್ಷಕರು ಮತ್ತು ಹೆಚ್ಚುವರಿ ನಿರ್ದೇಶಕರು, ಅಗ್ನಿ ಶಾಮಕ ಮತ್ತು ತುರ್ತು ಸೇವೆಗಳು, ಬೆಂಗಳೂರು ಇವರಿಗೆ ದಿನಾಂಕ 16.11.2005 ರಿಂದ 26.11.2005 ರವರೆಗಿನ (ಉದಿಸೇ) 11 ದಿನಗಳ ಗಳಿಕೆ ರಜೆಯನ್ನು ಉಪಯೋಗಿಸಿಕೊಳ್ಳಲು ಸಕ್ಷಮ ಪ್ರಾಧಿಕಾರದ ಮಂಜೂರಾತಿ ಪಡೆದುಕೊಳ್ಳುವ ಷರತ್ತಿಗೆ ಒಳಪಟ್ಟು ಸದರಿಯವರಿಗೆ ಹಾಗೂ ಅವರ ಕುಟುಂಬದ ಈ ಕೆಳಕಾಣಿಸಿದ ಸದಸ್ಯರಿಗೆ ಪ್ರಸಕ್ತ 2002-05ರ ಬ್ಲಾಕ್ ಅವಧಿಯಲ್ಲಿ ಗ್ಯಾಂಗ್‌ಟಾಕ್‌ಗೆ ಹೋಗಿ ಬರಲು ಕೇಂದ್ರ ನಿಯಮಗಳಡಿ ರಜಾ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ಸಂಬಂಧ | ವಯಸ್ಸು |
|---|---|---|---|
| 1 | ಶ್ರೀ ಸಿ. ಚಂದ್ರಶೇಖರ್ | ಸ್ವಂತ | 56 ವರ್ಷ |
| 2 | ಶ್ರೀಮತಿ ರೂಪಾಚಂದ್ರಶೇಖರ್ | ಪತ್ನಿ | 52 ವರ್ಷ |
| 3 | ಕು: ರಿಚಾ | ಮಗಳು | 13 ವರ್ಷ |

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90 ರಷ್ಟು ಹಣವನ್ನು ಅಂತಿಮ ಪ್ರಯಾಣ ಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1364

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

**PERSONNEL & ADMINISTRATIVE REFORMS SECRETARIAT**
**NOTIFICATION**
**No. DPAR 443 SAS 2005, Bangalore, dated 12th November, 2005**

The service of Sri A.K. Agarwal, IAS (KN 70), ACS & Commissioner, Bangalore Metropolitan Regional Development Authority, Bangalore are withdrawn from Urban Development Department with immediate effect and he is posted untill further orders as ACS & Development Commissioner, Bangalore in the existing vacancy.

The Services of Sri Sudhir Krishna, IAS (KN 77), waiting for posting are placed at the disposal of Urban Development Department with immediate effect and until further orders to post him as Commissioner, Bangalore Metropolitan Regional Development Authority, Bangalore vice Sri A.K. Agarwal, IAS transferred.

Sri R.B. Agawane, IAS (KN 80), Regional Commissioner, Bangalore is transferred with immediate effect and posted until furhter orders as Principal Secretary to Government, Social Welfare Department, Bangalore vice Sri B.A. Coutinho, IAS proceeding on central deputation.

Sri V. Umesh, IAS (KN 81), Development Commissioner, Northern Karnataka, Belgaum is transferred with immediate effect and posted until further orders as Regional Commissioner, Belgaum in the existing vacancy.

Sri M.G. Halappanavar, IAS (KN 83), Secretary to Government, (Food Processing & Harvest Technology) Agriculture and Horticulture Department, Bangalore is transferred with immediate effect and posted until further orders as Commissioner for Sericulture Development & Director of Sericulture, Bangalore vice Sri Arvind Ramachandra Jannu, IAS transferred.

Sri C.R. Chikkmath, IAS (KN 86), Commissioner for Women & Child Development Department, Bangalore is transferred with immediate effect and posted until further orders as Regional Commissioner, Bangalore vice Sri R.B. Agawane, IAS transferred.

Sri K.S. Manjunath, IAS (KN 86), Commissioner for Religious and Charitable Endowments, Bangalore is transferred with immediate effect and posted until further orders as Labour Commissioner, Bangalore in the existing vacancy.

Sri Arvind Ramachandra Jannu, IAS (KN 86), Commissioner for Sericulture Development & Director of Sericulture, Bangalore is transferred with immediate effect and posted until further orders as Regional Commissioner, Gulbarga in the existing vacancy.

By Order and in the name of the Governor of Karnataka,

**K. SUDHAKARA SHETTY**

Under Secretary to Government,

P.R. 1365 Department of Personnel and Administration Reforms (Services-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 82 ಸೇಲೋಯು 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2005**

ಶ್ರೀ ಸಿ.ವೈ. ಇಲ್ಲೂರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ 6 (ಆರು) ತಿಂಗಳ ಅವಧಿಗೆ ಮಾತ್ರ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿ ಇರುವ ಅಪರ ನಿಬಂಧಕರು (ವಿಚಾರಣೆಗಳು) ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 15(1)(ಎ) ರನ್ವಯ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಲಾಗಿದೆ.

ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಪಿ.ಆರ್. 1366 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-2).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಆಕುಕ 106 ಎಂಎಂಸಿ 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2005**

ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಸ್ವತಂತ್ರ ಪ್ರಭಾರದ ಮೇಲಿರುವ ಈ ಕೆಳಕಂಡ ಅಂಗರಚನಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಗಳನ್ನು ಹೊಂದಿರುವವರಿಗೆ 12000-18300 ರೂ.ಗಳ AICTE ವೇತನ ಶ್ರೇಣಿಯ ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ಸ್ಥಾನಪನ್ನರಾಗಲು ತಕ್ಷಣದಿಂದ ಜಾರಿಗೆ ಬರುವಂತೆ ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅನುಕ್ರಮವಾಗಿ ಅವರುಗಳ ಹೆಸರುಗಳ ಮುಂದೆ ತೋರಿಸಿರುವ ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಹೊಂದಿರುವ ಹುದ್ದೆ ಮತ್ತು ಕಾಲೇಜು | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಡಾ: ಬಿ. ವಿಜಯಚಂದ್ರ, ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಕಿಮ್ಸ್, ಹುಬ್ಬಳ್ಳಿ. | ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು, ಡಾ: ಕೆ.ಎಂ. ನಾಗಪ್ಪರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ, ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಹುಬ್ಬಳ್ಳಿಯ ಕಿಮ್ಸ್‌ನ ಅಂಗರಚನಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಖಾಲಿ ಹುದ್ದೆಯಲ್ಲಿ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜಿಸಿ ನೇಮಿಸಲಾಗಿದೆ. |
| 2 | ಡಾ: ಗುರುಶಾಂತಮ್ಮ, ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ವಿಮ್ಸ್, ಬಳ್ಳಾರಿ | ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಡಾ: ಇಮ್ತಿಯಾಜ್ ಉಲ್ಲಾಹಕ್‌ರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ, ಈ ಹುದ್ದೆಯನ್ನು ಪದಗ್ರಹಿಸಿದ ಮರುದಿನದಿಂದ ಬಳ್ಳಾರಿಯ ವಿಮ್ಸ್‌ನ ಅಂಗರಚನಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಖಾಲಿ ಹುದ್ದೆಯಲ್ಲಿ ಅವರ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ನಿಯೋಜಿಸಿ ನೇಮಿಸಲಾಗಿದೆ. |
| 3 | ಡಾ: ಕೆ.ಆರ್. ದಾಕ್ಷಾಯಿಣಿ, ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಮೈಸೂರು ಮೆಡಿಕಲ್ ಕಾಲೇಜ್, ಮೈಸೂರು. | ಅಂಗರಚನಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜಿನ ಡಾ: ಜೆ.ಹೆಚ್. ಷರೀಫ್‌ರವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ. |

2. ಮೇಲೆ ಹೇಳಿದ ಸಹಾಯಕ ಪ್ರಾಧ್ಯಾಪಕರುಗಳು ಅವರ ಹೆಸರುಗಳ ಮುಂದೆ ಸೂಚಿಸಿದ ಸ್ಥಳಗಳಲ್ಲಿ ನೇರವಾಗಿ ಕಾರ್ಯಭಾರ ವಹಿಸಿಕೊಳ್ಳುವುದು ಮತ್ತು ಹಾಗೇ ವಹಿಸಿಕೊಂಡ ನಂತರ ಅಧಿಕಾರ ಪ್ರಮಾಣ ಸ್ವೀಕೃತಿ ಪತ್ರ (C.T.C.) ವನ್ನು ಸರ್ಕಾರಕ್ಕೆ ನೇರವಾಗಿ ಸಲ್ಲಿಸಿ ಇಲಾಖಾ ಮುಖ್ಯಸ್ಥರ ಗಮನಕ್ಕೆ ಸಹ ತರುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1367 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).